**ಮಕ್ಕಳಿಗೆ ಕತೆ ಹೇಳುವದು**

*ಪ್ರೊ. ಕೃಷ್ಣ ಕುಮಾರ್*

ಮಕ್ಕಳಿಗೆ ಕತೆ ಹೇಳುವದು ನಿಜವಾಗಿ ಒಂದು ಕುಶಲ ಕಾರ್ಯ. ನಾವೀಗ ಕತೆ ಹೇಳುವಾಗಿನ ಕೆಲ ವೈಶಿಷ್ಟ್ಯಗಳನ್ನು ಕಂಡುಕೊಳ್ಳುವ. ನಮ್ಮಲ್ಲಿಯ ಪ್ರಾಥಮಿಕ ಶಾಲೆಗಳಲ್ಲಿಯ ಮೊಟ್ಟ ಮೊದಲಿನ ಎರಡು ತರಗತಿಗಳಿಗೆ 'ಕತೆ' ಗಾಗಿ ಎಂದೇ ದಿನವಿಡೀಯ ಕಲಿಕೆಯಲ್ಲಿ ನಿಶ್ಚಿತವಾದ ಕಾಲಾವಧಿಯೇ ಇಲ್ಲದೆ ಇರುವದು ಬಹು ಶೋಚನೀಯವಾದ ಸ್ಥಿತಿ. ಇಂತಹದೇನಾದರು ಇದ್ದಿದ್ದರೆ ಮಕ್ಕಳು ಕೆಲಮಟ್ಟಿಗಾದರೂ ಶಾಲೆ ತಪ್ಪಿಸಿ ಮನೆಯಲ್ಲಿ ಉಳಿಯುತ್ತಿರಲಿಲ್ಲ. ಕೆಲವರಿಗೆ ನಾನು ಹೀಗೆ ಹೇಳುವದನ್ನು ಕಂಡು ಶಾಲೆ ಬಿಟ್ಟು ಹೋಗುವ ಸಮಸ್ಯೆಯನ್ನು ಗಂಭೀರವಾಗಿ ಯೋಚಿಸಿಲ್ಲ ಎಂದೆನ್ನಿಸಬಹುದು. ಕೆಲ ಶಾಲಾಧಿಕಾರಿಗಳು ನನ್ನ ಮಾತಿಗೆ ಹುಸಿನಗಬಹುದು. ಅವರ ಆಢಳಿತೆಯ ಜ್ಞಾನ ಮತ್ತು ವಿಶಾಲವಾದ ಅನುಭವಗಳಲ್ಲಿಯ ಒಂದಾದರೂ ದಿನ ಚಿಕ್ಕಮಕ್ಕಳ ಮೇಲೆ ಕತೆಗಳು ಬೀರುವ ಮೋಡಿಯ ನೆನಪು ಇರಲು ಸಾಕು.

ಶಿಕ್ಷಕರಿಗೆ ತರಬೇತಿ ಕೊಡುವ ಶಿಕ್ಷಣ ಸಂಸ್ಥೆಗಳಲ್ಲಿ ಕೂಡ ಕತೆ ಹೇಳುವದು ಪಠ್ಯಕ್ರಮಗಳಲ್ಲಿ ಇದ್ದರೂ ಕೂಡ ಈ ಮಾತನ್ನು ಅಷ್ಟೊಂದು ಗಂಭೀರವಾಗಿ ತೆಗೆದುಕೊಂಡಿಲ್ಲ ಎಂದೆನ್ನಿಸುತ್ತದೆ. ಪ್ರತಿಯೊಬ್ಬ ಶಿಕ್ಷಕ ತನ್ನ ತರಬೇತಿ ಕಾಲದಲ್ಲಿ ಸಾಂಪ್ರದಾಯಿಕವಾಗಿ ತಲೆತಲಾಂತರದಿಂದ ಹೇಳುತ್ತ ಬಂದಿರುವ ಕನಿಷ್ಟ ಮೂವತ್ತು ಕತೆಗಳನ್ನಾದರೂ ಚಿಕ್ಕಮಕ್ಕಳಿಗೆ ತಿಳಿಯುವ ಹಾಗೆ ಹೇಳುವ ದಿವಸದ ಅಪೇಕ್ಷೆಯಲ್ಲಿ ನಾನಿದ್ದೇನೆ. ನಾನು 'ತಿಳಿಯುವ ಹಾಗೆ' ಎಂದು ಹೇಳಿದಾಗ ಈ ಎಲ್ಲ ಕತೆಗಳನ್ನು ಹೇಳುವವರು ಸರಿಯಾಗಿ ನೆನಪಿನಲ್ಲಿಟ್ಟು ಸುಲಭವಾಗಿ ಮತ್ತು ಆತ್ಮವಿಶ್ವಾಸದಿಂದ ಹೇಳುವರು ಎಂಬರ್ಥದಲ್ಲಿ ಹೇಳಿದ್ದೇನೆ. ನಮ್ಮ ಸಮಾಜದಲ್ಲಿ ಸಾಂಪ್ರದಾಯಿಕವಾಗಿ ಹೇಳುತ್ತಿದ್ದ ಸಾವಿರಾರು ಕತೆಗಳಲ್ಲಿಂದ ಮೂವತ್ತು ಕತೆಗಳ ಆಯ್ಕೆ ಬಹು ಕಷ್ಟದ ಕೆಲಸವಾಗಲಿಕ್ಕಿಲ್ಲ. ಮೊದಲೆರಡು ತರಗತಿಗಳಿಗೆ ಶಿಕ್ಷಕರು ಹೇಳುವ ಈ ಮೂವತ್ತು ಕತೆಗಳು ಇಡೀ ತರಗತಿಗಳ ಪರಿಸರವನ್ನೇ ಮಾರ್ಪಾಡಿಸುತ್ತವೆ. ಮಾತ್ರ ಕತೆ ಹೇಳುವದನ್ನು ಪಠ್ಯಕ್ರಮದಲ್ಲಿ ಕಡ್ಡಾಯವಾಗಿ ಸೇರಿಸುವ ಮತ್ತು ಅದಕ್ಕೆ ಗೌರವಿಸುವ ಶರತ್ತು ಇದರಲ್ಲಿದೆ.

**ಕತೆಗಳ ಆಯ್ಕೆ ಹೇಗೆ ಮಾಡಬೇಕು?**

ಮುಂದುವರಿಯುವ ಮೊದಲು ಹಿಂದಿನ ಪ್ಯಾರಾಗ್ರಾಫ್‌ನಲ್ಲಿ ನಾನು ಬಳಸಿದ ವಿಶೇಷಣವನ್ನು ಸ್ಪಷ್ಟಪಡಿಸಲು ಬಯಸುತ್ತೇನೆ. ನಾನು ಸಾಂಪ್ರದಾಯಿಕ ಕತೆಗಳನ್ನು ಹೇಳುವುದರ ಪರವಾಗಿರುತ್ತೇನೆ ಎಂದು ಬರೆದಿದ್ದೇನೆ. ತರಬೇತಿ ಪಡೆಯುವ ಯುವ ಶಿಕ್ಷಕರಿಗೆ ಹೇಳಲು ಬಯಸಿದ ಕತೆಗಳನ್ನು ಹುಡುಕಲು ಕೇಳಿದಾಗ, ಅವರು ಸಾಮಾನ್ಯವಾಗಿ ಮಕ್ಕಳ ಪತ್ರಿಕೆಗಳಲ್ಲಿ ಅಚ್ಚಾದ ಕತೆಗಳ ಆಯ್ಕೆ ಮಾಡುತ್ತಾರೆ, ಎಂಬುದು ನನ್ನ ಅನುಭವ. ಅವರಲ್ಲಿಯ ಇನ್ನು ಕೆಲವರು ಕಾಮಿಕ್ಸ್ ಕತೆಗಳನ್ನು ಆಯ್ಕೆ ಮಾಡಿದರೆ ಇನ್ನು ಕೆಲವರು ಹಾಸ್ಯ-ವಿನೋದದ ಇಲ್ಲವೆ ನಿಜ ಜೀವನದ ಪ್ರಸಂಗಗಳ ಬಗ್ಗೆ ಕತೆ ಕಟ್ಟಿ ಹೇಳಲು ಬಯಸುತ್ತಾರೆ.. ಈ ರೀತಿಯ ವಿವರಗಳನ್ನು 'ಕತೆ' ಎಂದೂ ವರ್ಗೀಕರಿಸಬಹುದು ನಿಜ, ಆದರೆ ಅಂತಹ ಪ್ರತಿಯೊಂದು ಕತೆಯು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವ ಆರೇಳು ವರ್ಷದ ಚಿಕ್ಕಮಕ್ಕಳ ಮನಗಳನ್ನು ಸೆರೆ ಹಿಡಿಯುತ್ತವೆ ಎಂಬುದರ ಬಗ್ಗೆ ನನಗೆ ಶಂಕೆ. ತಲೆತಲಾಂತರದಿಂದ ಸಾಂಪ್ರದಾಯಿಕವಾಗಿ ಹೇಳುತ್ತಿದ್ದ ಕತೆಗಳಲ್ಲಿದ್ದ ಗುಣಲಕ್ಷಣಗಳು ವಿವಿಧ ಮಾಧ್ಯಮಗಳಲ್ಲಿ ಕಂಡುಬರುವ ಈತ್ತೀಚಿನ ಕತೆಗಳಲ್ಲಿ ಕಂಡುಬರಲಾರವು. ಈ ಕತೆಗಳಲ್ಲಿಯ ಗುಣಲಕ್ಷಣಗಳ ವೈಶಿಷ್ಟ್ಯಗಳ ಬಗ್ಗೆ ಶೀಘ್ರದಲ್ಲೇ ನಾನು ಚರ್ಚಿಸುವವನಿದ್ದೇನೆ. ಆದರೆ ಮೊದಲು ನಾನು ಸಾಂಪ್ರದಾಯಿಕ ಕತೆಗಳ ಕೆಲವು ಮೂಲಗಳನ್ನು ನಮೂದಿಸಲು ಬಯಸುತ್ತೇನೆ. ಮೊದಲನೆಯದಾಗಿ: ಪಂಚತಂತ್ರ, ಜಾತಕ, ಮಹಾಭಾರತ, ಸಹಸ್ರ ರಜನಿ ಚರಿತ್ರ, ವಿಕ್ರಮಾದಿತ್ಯನ ಕಥಾಸಂಗ್ರಹ ಮತ್ತು ವಿವಿಧ ಪ್ರದೇಶಗಳ ಜಾನಪದ ಕತೆಗಳು ಸಾಂಪ್ರದಾಯಿಕ ಕತೆಗಳ ಬಹು ಶ್ರೀಮಂತ ಮೂಲಗಳು. ಇವುಗಳ ನಂತರ ನಾವು ಕಥಾ ಸರಿತ್ಸಾಗರ್, ಗುಲಿಸ್ತಾನ್ ಮತ್ತು ಬೋಸ್ತಾನ್ ಕತೆಗಳನ್ನು ಮತ್ತು ಪ್ರಪಂಚದಾದ್ಯಂತ ಹೇಳುತ್ತಿರುವ ಜಾನಪದ ಕತೆಗಳನ್ನು ಸೇರಿಸಬಹುದು. ಈ ಮೂಲಗಳು ಅಷ್ಟು ಸುಲಭವಾಗಿ ಲಭ್ಯವಾಗಲಿಕ್ಕಿಲ್ಲ. ಹಾಗಾಗಿ ಪಠ್ಯಕ್ರಮದಲ್ಲಿ ಕತೆ ಹೇಳುವಿಕೆಗೆ ನಿಯಮಿತ ಸ್ಥಾನವನ್ನು ನೀಡಬೇಕಾದರೆ, ಈ ಎಲ್ಲ ಮೂಲಗಳಿಂದ ಆಯ್ದ ಕತೆಗಳ ಸಂಕಲನವನ್ನು ಮಾಡಬೇಕಾಗುವದು.

**ಹೇಳಲು ಯೋಗ್ಯವಾದ ಕತೆಗಳು**

ಒಳ್ಳೆಯ ಕತೆಯು ಯಾವ ಗುಣಲಕ್ಷಣಗಳನ್ನು ಹೊಂದಿದೆ ಎಂಬುದನ್ನು ಕಂಡುಹಿಡಿಯುವ ಸರಳ ಮಾರ್ಗವೆಂದರೆ ತಲೆಮಾರುಗಳಿಂದ ಮಕ್ಕಳೆಲ್ಲರು ಸಂತೋಷದಿಂದ ಆಲಿಸುವಂತಹ ಕತೆಗಳು ಎಂದೆನ್ನಬಹುದು. ಪಂಚತಂತ್ರದ ಸಿಂಹ ಮತ್ತು ಮೊಲದ ಕತೆಯು ಅಂತಹ ಒಂದು ಉದಾಹರಣೆಯಾಗಿದೆ. ಈ ಕತೆಯ ತಿರುಳು ಕತೆಯೊಂದಿಗಿನ ನಮ್ಮ ಪರಿಚಯದಿಂದಾಗಿ ನಾವು ಊಹಿಸಿದಷ್ಟು ಸುಲಭವಿಲ್ಲ. ಈ ಕತೆಯ ಮುಖ್ಯಾಂಶಗಳನ್ನು ನಾವು ಮೊದಲು ನೆನಪಿಸಿಕೊಳ್ಳುವ. ಕತೆಯಲ್ಲಿಯ ಮುದಿ ಸಿಂಹದ ಮುಂದೆ ಪುಟ್ಟ ಮೊಲ ಕಾಣಿಸಿಕೊಳ್ಳಬೇಕಾದ ದಿನ ಕೊನೆಗೆ ಬರುತ್ತದೆ. ಮೊಲವು ಸಿಂಹದ ಗವಿಯ ಬಾಗಿಲನ್ನು ತಲುಪಲು ತಡಮಾಡಿದೆ; ಸಿಂಹವು ಹಸಿವಿನಿಂದಾಗಿ ರೊಚ್ಚಿಗೆದ್ದಿದೆ. ಈ ಇಕ್ಕಟ್ಟಿನ ಕ್ಷಣದಲ್ಲಿ ಕೋಪದಿಂದ ಕಿಡಿಕಿಡಿಯಾಗಿದ್ದ ಸಿಂಹದೊಂದಿಗೆ ಯಾವುದೇ ರೀತಿಯ ನೆವಗಳನ್ನು ಹೇಳುವ ಸಮಯವಲ್ಲ ಮತ್ತು ಅದರ ಹಸಿವಿನ ತುತ್ತಾಗುವದನ್ನು ತಪ್ಪಿಸಲು ಅಸಾಧ್ಯ ಎಂಬುದು ಗೊತ್ತಿದ್ದರೂ ಮೊಲವು ತನಗೆ ಇಷ್ಟು ಸಮಯ ಏಕೆ ಹಿಡಿಯಿತು ಎಂಬುದನ್ನು ಹೇಳಲು ಹವಣಿಸುತ್ತದೆ. ದಾರಿಯಲ್ಲಿ ಮತ್ತೊಂದು ಸಿಂಹ ಎದುರಾಗಿತ್ತು ಎಂಬ ಮಾತು ಸಂಪೂರ್ಣವಾಗಿ ಸುಳ್ಳಾಗಿದ್ದರೂ, ಹಸಿದು ಕೋಪಗೊಂಡ ಕಾಡಿನರಸನೆಂದು ಹೆಸರಾದ ಸಿಂಹ ಆ ಸುಳ್ಳನ್ನು ಕೂಡಲೇ ನಂಬುತ್ತದೆ. ಈಗ ಈ ಕಾಡಿನರಸ ತನಗಾದ ಹಸಿವನ್ನುಮರೆತು ಮೊದಲು ತನ್ನ ಎದುರಾಳಿಯೊಂದಿಗೆ ಎದುರುಗೊಳ್ಳಲು ಬಯಸುತ್ತದೆ. ಇದಕ್ಕಾಗಿ ಅದು ಮೊಲದೊಂದಿಗೆ ಆ ಎದುರಾಳಿ ಇದ್ದ ಬಾವಿಯ ಕಡೆಗೆ ಹೋಗುತ್ತದೆ. ಈ ಎರಡನೇ ನಿರ್ಣಾಯಕ ಕ್ಷಣದಲ್ಲಿ, ಈ ಕತೆಯು ಜೀವ ಉಳಿಸಲು ಮಾಡಿದ ಮೊಲದ ವಂಚನೆ ಮತ್ತು ಸಿಂಹದ ಹುಚ್ಚು ಅಸಮಾಧಾನ ಮತ್ತು ಅಸೂಯೆಗಳನ್ನು ಅವಲಂಬಿಸಿ ಮುಂದೆ ಸಾಗುತ್ತದೆ. ಈ ಚಾತುರ್ಯ ಮೊಲವನ್ನು ಹೊರತುಪಡಿಸಿ ಬೇರೆ ಯಾರಿಗೂ ತಿಳಿಯಲಾರದು.. ಬಾವಿಯಲ್ಲಿರುವ ತನ್ನ ನೆರಳನ್ನೇ ಇನ್ನೊಂದು ಸಿಂಹ ಎಂದು ತಪ್ಪಾಗಿ ಭಾವಿಸಿದ ಸಿಂಹವು ತನ್ನ ಸಿಟ್ಟಿನ ರಭಸದಲ್ಲಿ ಬಾವಿಯಲ್ಲಿ ಬಿದ್ದು ಮೃತ್ಯುವಿನ ತುತ್ತಾಗುತ್ತದೆ.

ಈ ಚಿರಪರಿಚಿತ ಹಳೆಯ ಕತೆಯನ್ನು ನಾವು ಇನ್ನಿಷ್ಟು ಸೂಕ್ಷ್ಮವಾಗಿ ನೋಡುವ. ಮೊದಲನೆಯದಾಗಿ, ಕತೆಯ ವಿಷಯದಲ್ಲಿ ಯಾವುದೇ ಉಪದೇಶವಿಲ್ಲ. ಇದಲ್ಲದೆ ರಾಕ್ಷಸ ಶಕ್ತಿ ಇಲ್ಲವೆ ಸಾವಿನ ನಿಜವಾದ ಬೆದರಿಕೆಯನ್ನು ಎದುರಿಸುವಾಗ ತನ್ನನ್ನು ಹೇಗೆ ರಕ್ಷಿಸಿಕೊಳ್ಳುವುದು ಎಂಬಂತಹ ಗಂಭೀರ ಪ್ರಶ್ನೆಗಳೊಂದಿಗೆ ಕತೆಯು ಕೇಳುವವರ ಮನಗಳನ್ನು ಸೆರೆಹಿಡಿಯುತ್ತದೆ. ಸಾಮಾನ್ಯವಾಗಿ, ನಾವು ಮಕ್ಕಳೊಂದಿಗೆ ಮಾತನಾಡುವಾಗ ಸಾವಿನಂತಹ ಪ್ರಶ್ನೆಗಳನ್ನು ಎತ್ತುವುದಿಲ್ಲ, ಆದರೆ ಅಂತಹ ಪ್ರಶ್ನೆಗಳಲ್ಲಿ ಮಕ್ಕಳಿಗೆ ಹೆಚ್ಚಿನ ಆಸಕ್ತಿ ಇರುತ್ತದೆ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಈ ಆಸಕ್ತಿಗೆ ಕಾರಣವೇನು ಎಂದು ನಾವು ಕೇಳಬಹುದು, ಆದರೆ ನಾನು ಈ ಪ್ರಶ್ನೆಯನ್ನು ಬದಿಗಿಡುತ್ತೇನೆ. ಸದ್ಯಕ್ಕೆ, ನಾನು ಇನ್ನೊಂದು ವೈಶಿಷ್ಟ್ಯವನ್ನು ಪರಿಗಣಿಸಲು ಬಯಸುತ್ತೇನೆ. ದೊಡ್ಡ ದೊಡ್ಡ ಜೀವಿಗಳು ಮುಂದೊಡ್ಡಿದ ಸಂಕಟಗಳ ವಿರುದ್ಧ ಹೋರಾಡುತ್ತಿರುವ ಒಂದು ಪುಟ್ಟ ಜೀವಿಯ ಕತೆ ಇದು. ಈ ಸಂಕಟದಿಂದ ಹೊರಬರಲು, ಸಣ್ಣ ಜೀವಿ ಹೂಡಿದ ಸಂಚು ಇದು. ಅದನ್ನು ನಾವು ಸಾಮಾನ್ಯವಾಗಿ ಅನೈತಿಕ ಎಂದು ಕರೆಯುತ್ತೇವೆ.

ಮೊಲವು ಹೂಡಿದ ಈ ಒಳಸಂಚು ಅದರ ವ್ಯಕ್ತಿತ್ವದ ಕೆಲ ಗುಣವಿಶೇಷಗಳನ್ನು ಎತ್ತಿ ತೋರಿಸುತ್ತದೆ. ಈ ಗುಣವಿಶೇಷಗಳಲ್ಲಿ ಅದರ ಅಸಾಧಾರಣ ಧೈರ್ಯ, ಗಂಡಾಂತರ ಕಾಲದಲ್ಲಿ ತೋರಿದ ಆತ್ಮ ವಿಶ್ವಾಸ, ಇಕ್ಕಟ್ಟಿನ ಸನ್ನಿವೇಶದಲ್ಲಿ ಇದ್ದಾಗಲೂ ಕೂಡ ಕೊನೆಯ ಕ್ಷಣದವರೆಗೂ ತೋರಿದ ಸಾಮರ್ಥ್ಯ ಮತ್ತು ತನಗಿಂತಲೂ ಹೆಚ್ಚು ಬಲವಿದ್ದವರ ಹಾಗು ವಯಸ್ಸಿನಲ್ಲಿ ಹಿರಿಯರಿದ್ದವರ ಎದುರು ಹೇಗೆ ವರ್ತಿಸಬೇಕು ಎಂಬುದರ ತಿಳಿವು ಮುಂತಾದ ಗುಣಗಳು ಇಲ್ಲಿ ಕಂಡು ಬರುತ್ತವೆ.

ಕತೆಯು ಎಷ್ಟು ವೇಗವಾಗಿ ಮುನ್ನಡೆಯುತ್ತದೆ ಎಂಬುದನ್ನು ಕೂಡ ನಾವು ಗಮನಿಸಬೇಕಾದ ಸಂಗತಿ. ಕಾಡಿನಲ್ಲಿರುವ ಈ ಕಾಡಿನ ಅರಸನು ತನ್ನ ಹಸಿವನ್ನು ತಣಿಸಲು ದಿನಬೆಳಗು ಬೇಟೆಯಾಡಿ ಪ್ರಾಣಿಗಳನ್ನು ತಿನ್ನುವದಕ್ಕಿಂತ ರಾಜಾಜ್ಞೆ ಮಾಡಿ ದಿನಾಲು ಒಂದು ಪ್ರಾಣಿ ನನ್ನ ಗುಹೆಗೆ ಬಂದು ನನ್ನ ಹಸಿವನ್ನು ತಣಿಸಬೇಕೆಂದು ಹೇಳಿತು. ಯಾವದೇ ಉಪಾಯಗಾಣದೆ ದಿನಾಲು ಸರದಿಯಿಂದ ಒಂದು ಪ್ರಾಣಿ ನಿರ್ದಿಷ್ಟ ವೇಳೆಗೆ ಹಾಜರಾಗಿ ಈ

ಮುದಿಸಿಂಹದ ಆಹಾರವಾಗುತ್ತಿದ್ದವು. ಕೆಲ ದಿನಗಳಾದ ಮೇಲೆ ಈ ಚಿಕ್ಕ ಮೊಲದ ಸರದಿ ಬಂದಿದ್ದರಿಂದ ತನ್ನ ಹಾಗು ಇನ್ನುಳಿದ ಪ್ರಾಣಿಗಳ ಜೀವ ಉಳಿಸಲು ಮೊಲ ಶೋಧಿಸಿದ ಉಪಾಯ ಈ ಕತೆಯ ಕೇಂದ್ರದಲ್ಲಿದೆ. ತನ್ನನ್ನು ರಕ್ಷಿಸಿಕೊಳ್ಳಲು ಭೀಷಣವಾದ ತಂತ್ರವನ್ನು ಯೋಚಿಸಿದ ನಂತರ ಮೊಲವು ಒಂದು ಕ್ಷಣವನ್ನು ವ್ಯರ್ಥಗೊಳಿಸದೆ ಮುನ್ನಡೆಯಿತು. ಎಲ್ಲ ಘಟನೆಗಳು ಬಹು ಶೀಘ್ರದಲ್ಲಿ ಸಂಭವಿಸುತ್ತ ಹೋದವು. ಸಂಭಾಷಣೆಯ ಮೂಲಕ ಕತೆ ಆಲಿಸುವವರು ಪ್ರತಿಯೊಂದು ಸನ್ನಿವೇಶವನ್ನು ಅರ್ಥಪಡಿಸಿಕೊಳ್ಳಬಹುದು. ಮೊಲದ ದೃಷ್ಟಿಯಿಂದ ಎಲ್ಲ ಪರಿಸ್ಥಿತಿಯ ಅರ್ಥ ಕಲ್ಪಿಸುವದನ್ನು ಬಿಟ್ಟು ಆಲಿಸುವವರಿಗೆ ಬೇರೆ ದಾರಿಯೇ ಇಲ್ಲವೆಂಬುದು ಇಲ್ಲಿ ಸ್ಪಷ್ಟವಾಗಿದೆ.

ಈ ಕತೆಯು ಇಷ್ಟೊಂದು ಜನಪ್ರಿಯತೆಯನ್ನು ಗಳಿಸುವ ಕಾರಣಗಳನ್ನು ಗುರುತಿಸಲು ಈ ಸಂಕ್ಷಿಪ್ತ ವಿವರಣೆ ಸಾಕು. ಮೊದಲನೆಯದಾಗಿ, ಕತೆಯು ಮಕ್ಕಳಿಗೆ ಒಬ್ಬ ನಾಯಕನನ್ನು ಕೊಡುತ್ತದೆ. ಆಲಿಸುವವರು ಅದರ ಜೊತೆ ಸಂಪೂರ್ಣವಾಗಿ ತನ್ಮಯವಾಗುವಂತೆ ಮಾಡುತ್ತದೆ. ಈ ನಾಯಕನ ಪಾತ್ರದಲ್ಲಿ ಮೊಲವಿದೆ. ಕತೆಯಲ್ಲಿನ ಈ ಪಾತ್ರವು ಅನೇಕ ಪ್ರಯೋಗಗಳನ್ನು ಮಾಡುತ್ತ ಮುಂದೆ ಹೋಗುತ್ತಲಿದೆ. ಕತೆ ಕೇಳುವ ಮಕ್ಕಳು ಮೊಲದಂತೆಯೇ ತಮ್ಮ ದಿನನಿತ್ಯದ ಜೀವನದಲ್ಲಿ ಕ್ಲೇಶಗಳನ್ನು ಅನುಭವಿಸುತ್ತಿರುತ್ತಾರೆ. ಮೊಲ ಕೂಡ ಅವರಂತೆಯೇ ಚಿಕ್ಕದು ಮತ್ತು ದುರ್ಬಲ. ಮನಸ್ಸಿಲ್ಲದಿದ್ದರೂ ಏನನ್ನಾದರೂ ಮಾಡಲೇಬೇಕು, ಎಂಬ ತವಕ. ತನಗಿಂತ ಎಷ್ಟೋ ಪಟ್ಟು ಹೆಚ್ಚು ಶಕ್ತಿಯುತವಾದ ಪ್ರಾಣಿಯನ್ನು ಎದುರಿಸಿ ಕೊಲ್ಲುವದು ಅಷ್ಟು ಸುಲಭವಲ್ಲ. ಎದೆಯಲ್ಲಿ ಅಳುಕು. ಇಂತಹ ಪ್ರಸಂಗಗಳಿಗೆ ಮಕ್ಕಳು ತಮ್ಮ ಆಯುಷ್ಯದಲ್ಲಿ ಎದುರಾಗುತ್ತಾರೆ. ಈ ಮಕ್ಕಳ ಬವಣೆಯನ್ನು ನಾವು ಹೆಚ್ಚಾಗಿ ಗಮನಿಸುವುದಿಲ್ಲ. ಏಕೆಂದರೆ ನಾವು ಪಾಲಕರ ಇಲ್ಲವೆ ಶಿಕ್ಷಕರ ಪಾತ್ರಗಳನ್ನು ನಿರ್ವಹಿಸುವಲ್ಲಿ ತುಂಬಾ ನಿರತರಾಗಿರುತ್ತೇವೆ.. ಉದಾಹರಣೆಗೆ, ಹಠಾತ್ತಾಗಿ ಸಂಭವಿಸಿದ ಸಾವಿನಿಂದ ಉಂಟಾದ ಎದೆಗುದಿ ಇಡೀ ಬಾಲ್ಯತನವನ್ನೇ ವ್ಯಾಪಿಸುವ ಅನುಭವದ ಕಲ್ಪನೆ ನಮ್ಮಲ್ಲಿ ಕೆಲವೇ ಜನರಲ್ಲಿ ಇರಬಹುದು. ನಮಗಿಂತಲೂ ಶಕ್ತಿಯುತವಾದದ್ದು ಮತ್ತು ದೊಡ್ಡದಾಗಿರುವಂತಹದು ನಮ್ಮೆದುರು ಧುತ್ತನೆ ಬಂದು ನಿಂತಾಗ ಇಂತಹ ಎದೆಗುದಿಯ ಅನುಭವ ನಮಗೂ ಕೂಡ ಆಗುತ್ತದೆ.

ಕತೆಯು ಪ್ರಾರಂಭವಾದ ತಕ್ಷಣವೇ ಮಕ್ಕಳೆಲ್ಲ ಕಿವಿಗೊಟ್ಟು ಕೇಳಲು ಹಾತೊರೆಯುತ್ತಾರೆ. ಏಕೆಂದರೆ ಮಕ್ಕಳು ಕತೆಯಲ್ಲಿ ತಮ್ಮನ್ನು ತಾವೇ ನೋಡತೊಡಗುತ್ತಾರೆ. ಕತೆ ಮುಂದುವರೆದಂತೆ ಕತೆಯಲ್ಲಿ ನಡೆಯುವ ಘಟನೆಗಳಿಂದ ಅದರ ಆಕರ್ಷಣೆಯು ಮತ್ತಷ್ಟು ಬಲಗೊಳ್ಳುತ್ತದೆ. ಚಿಕ್ಕ ಮಕ್ಕಳಲ್ಲಿ ಏನಾದರೂ ನೆವ ಹೇಳಿ ಕೊಟ್ಟ ಕೆಲಸವನ್ನು ತಪ್ಪಿಸುವ ಒಂದು ಸುಪ್ತವಾದ ಇಚ್ಛೆ ಇದ್ದೇ ಇರುತ್ತದೆ. ಅದನ್ನು ಅವರು ಮೊಲ ಹೂಡಿದ ತಂತ್ರದಲ್ಲಿ ಮತ್ತು *ನನಗೇಕೆ ತಡವಾಯಿತು, ಮತ್ತೊಂದು ಸಿಂಹ ಇದೆ* ಎಂಬ ಸಂಭಾಷಣೆಗಳಲ್ಲಿ ಕಾಣುತ್ತಾರೆ. ಇದು ಕೇವಲ ತನ್ನ ಪ್ರಾಣವನ್ನು ಉಳಿಸಲು ಮಾಡಿದ ಪ್ರಯತ್ನವಷ್ಟೇ ಅಲ್ಲ; ಅದರಲ್ಲಿ ಬಲಾಢ್ಯವಾದ ಸಿಂಹವನ್ನು ಕೊಲ್ಲುವ ಯೋಚನೆ ಕೂಡ ಇದೆ. ನಿಜವಾಗಿ ನೋಡಿದರೆ ಸಂದಿಗ್ಧದಲ್ಲಿ ಸಿಕ್ಕ ಈ ಚಿಕ್ಕ ಮೊಲಕ್ಕೆ ಹೇಗಾದರೂ ಮಾಡಿ ತನ್ನ ಪ್ರಾಣ ಉಳಿಸಿಕೊಳ್ಳಲು ಅನ್ಯಾಯದಿಂದ ವರ್ತಿಸುವ ಈ ಸಿಂಹವನ್ನು ಕೊಲ್ಲದೆ ಬೇರೆ ದಾರಿಯೇ ಕಾಣುವದಿಲ್ಲ. ಇದರಲ್ಲಿ ಏನಾದರೂ ನೈತಿಕತೆ ಇದ್ದರೆ ಅದು ಆತ್ಮರಕ್ಷಣೆಯಲ್ಲಿ ಇದೆ ಎಂದು ಅದು ಮನಗಂಡಿದೆ. ನಾವು ಮಗುವಿನ ದೃಷ್ಟಿಕೋನದಿಂದ ಕತೆಯ ಘಟನೆಗಳನ್ನು ವೀಕ್ಷಿಸಿದಾಗ ಇದೆಲ್ಲ ನೈತಿಕವೇ. ಆದರೆ ಹಿರಿಯರ ದೃಷ್ಟಿಯಲ್ಲಿ ಈ ಕತೆಯ ನಿಷ್ಕರ್ಷ ಅನೈತಿಕವೆಂದೇ ಅನ್ನಿಸಬಹುದು.

**ಇದೆಲ್ಲದರ ಅವಶ್ಯಕತೆ ಏನಿದೆ?**

ಇಲ್ಲಿಯವರೆಗೆ, ಮಕ್ಕಳು ಚಿತ್ತಾಕರ್ಷಕ ಕತೆ ಕೇಳುವಾಗ ಅದರಲ್ಲಿ ನೈತಿಕತೆ, ನೈತಿಕ ಶಿಕ್ಷಣ ಇಲ್ಲವೆ ಕನಿಷ್ಠ ಮಟ್ಟಿಗೆ ಅದರ ಸಂಬಂಧ ಇವುಗಳ ಗೋಜಿಗೆ ಹೋಗಲಾರರು, ಎಂಬುದು ಸ್ಪಷ್ಟವಾಗಿರಲು ಸಾಕು. ಆಳವಾಗಿ ಯೋಚಿಸಿದರೆ ಮೊಲ ಮತ್ತು ಸಿಂಹದ ಕತೆಯಲ್ಲಿ ಏನಾದರೂ ಸ್ಫೂರ್ತಿದಾಯಕ ಇದೆ ಎಂಬುದು ಗೊತ್ತಾಗುವದು. ಸಂಕಟದ ಸನ್ನಿವೇಶದಲ್ಲಿ ತಲೆಯನ್ನು ಶಾಂತವಾಗಿ ಇಡುವದರಂದ ಆಗುವ ಪ್ರಯೋಜನವನ್ನು ಕತೆ ಹೇಳಬಯಸುತ್ತದೆ. ವ್ಯಾವಹಾರಿಕ ಬುದ್ಧಿಯ ಉಪಯೋಗ ಮತ್ತು ಕಲ್ಪನೆಯನ್ನು ಬಳಸುವುದು ಎಷ್ಟು ಮುಖ್ಯ ಎಂಬುದನ್ನು ಸಹ ಈ ಕತೆ ತೋರಿಸುತ್ತದೆ. ಆದರೆ ಇಂತಹಗಳನ್ನು ಸಾಂಪ್ರದಾಯಿಕ ಅರ್ಥದಲ್ಲಿ

'ನೈತಿಕ ಶಿಕ್ಷಣ' ಎಂದು ಯಾರೂ ಕರೆಯಲಾರರು. ನಿಜವಾಗಿ ನೋಡಿದರೆ ಶ್ರೇಷ್ಠವೆನಿಸಿದ ಸಾಂಪ್ರದಾಯಿಕ ಕತೆಗಳು ಸಾಂಪ್ರದಾಯಿಕ ಅರ್ಥದಲ್ಲಿ 'ನೈತಿಕತೆ'ಯನ್ನು ಅಪರೂಪವಾಗಿ ಕಲಿಸುತ್ತವೆ. . ನಾವೀಗ ಗಮನಿಸಬೇಕಾದ ಮುಖ್ಯಾಂಶವೆಂದರೆ ಕತೆ ಹೇಳುವ ಉದ್ದೇಶವು ಮಕ್ಕಳ ನೈತಿಕತೆಯ ಬೆಳವಣಿಗೆಗೆ ಅಲ್ಲ. ಕತೆ ಹೇಳುವಿಕೆಯ ಪ್ರಯೋಜನಗಳು ಸಾಕಷ್ಟು ವೈವಿಧ್ಯಮಯವಾಗಿವೆ ಮತ್ತು ಅವು ಈ ಕೆಳಗಿನಂತಿವೆಃ ಕತೆಗಳು ಚೆನ್ನಾಗಿ ಆಲಿಸುವ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುತ್ತವೆ. ಉತ್ತಮ ಶ್ರೋತೃ ಯಾರು? ಕತೆಯನ್ನು ಕೊನೆಯವರೆಗೂ ಆಲಿಸುವವನು ನಿಜವಾಗಿ ಒಳ್ಳೆಯ ಶ್ರೋತೃ. ಅನೇಕ ಜನರ ಬಗ್ಗೆ ಕೂಡ ನಾವು ಹೀಗೆ ಹೇಳಲು ಸಾಧ್ಯವಿಲ್ಲ. ಹರಟೆ ಹೊಡೆಯುವ ಸಮಯದಲ್ಲಿಯೂ ಜನರು ಇನ್ನೊಬ್ಬರ ಮಾತುಗಳನ್ನು ಸರಿಯಾಗಿ ಕೇಳದೆ ಅಡ್ಡಿಪಡಿಸುತ್ತ ಇರುತ್ತಾರೆ. ಮಾತು ಹೇಳುವವರು ಏನು ಹೇಳುತ್ತಾರೆಂಬುದು ತಮಗೆ ಮೊದಲೇ ಗೊತ್ತಿದೆ ಎಂದು ಭಾವಿಸುವ ಅವರ ಅಭ್ಯಾಸವೇ ಇದಕ್ಕೆ ಕಾರಣ. ಎದುರಿನವರ ಮಾತು ಪೂರ್ಣವಾಗಿ ಕೇಳಿಕೊಳ್ಳುವಷ್ಟು ತಾಳ್ಮೆ ಅವರಿಗಿಲ್ಲದೆ ಇರುವದು ಇನ್ನೊಂದು ಕಾರಣ. ಕಿವಿಗೊಟ್ಟು ಆಲಿಸುವುದು ಈಗೀನ ಕಾಲದಲ್ಲಿ ಕೌಶಲ್ಯವಷ್ಟೇ ಅಲ್ಲದೆ ಅದು ಒಂದು ಮನೋಧರ್ಮವಾಗಿದ್ದು ಅದನ್ನು ಪ್ರೋತ್ಸಾಹಿಸಲು ಮತ್ತು ಆ ವಿಷಯದಲ್ಲಿ ತರಬೇತಿ ಕೊಡುವ ಅಭ್ಯಾಸಕ್ರಮವಾಗಿದೆ ಎಂದು ಹೇಳಿದರೆ ಆಶ್ಚರ್ಯವಾಗಲಿಕ್ಕಿಲ್ಲ. ಕತೆ ಹೇಳುವಿಕೆಯು ನಮ್ಮ ಜೀವನದಲ್ಲಿಯ ನಿರ್ಣಾಯಕ ಸಮಯಗಳಲ್ಲಿ ತಾಳ್ಮೆಯಿಂದ ಆಲಿಸುವ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುತ್ತದೆ, ಇಷ್ಟೇ ಅಲ್ಲ, ಕಿವಿಗೊಟ್ಟು ಆಲಿಸುವ ಈ ಅಭ್ಯಾಸ ಜೀವಿತಾವಧಿಯ ಮನೋಧರ್ಮವಾಗಿ ಪರಿಣಮಿಸಬಹುದು.

ಪುರಾತನ ಮತ್ತು ಬಲಶಾಲಿಯುತ ಮೌಖಿಕ ಸಂಸ್ಕೃತಿಯನ್ನು ಪಡೆದಿರುವ ನಮ್ಮ ದೇಶದಲ್ಲಿ ಉತ್ತಮ ಕೇಳುಗರು ಅಪರೂಪವಾಗಿದ್ದಾರೆ ಎಂದು ಹೇಳಿದರೆ ಸ್ವಲ್ಪ ವಿಚಿತ್ರವೆನ್ನಿಸಬಹುದು. . ಈ ಪರಿಸ್ಥಿತಿಯು ಬಾಲ್ಯದಲ್ಲಿ ಕತೆ ಹೇಳುವ ಕಡೆಗಿನ ನಿರ್ಲಕ್ಷ್ಯಕ್ಕೆ ಸಂಬಂಧಿಸಿದ್ದರಿಂದ ಈ ಸ್ಥಿತಿ ಉಂಟಾಗಿದೆ ಎಂಬುದು ನನ್ನ ಊಹೆ. ಆಧುನಿಕ ಭಾರತವು ಮಕ್ಕಳಿಗೆ ನಿಯಮಿತವಾಗಿ ಕತೆಗಳನ್ನು ಹೇಳಲು ಸಮಯ ಕೊಡುತ್ತಿಲ್ಲ ಎಂದು ತೋರುತ್ತದೆ. ಈ ಕೊರತೆಯ ಪರಿಣಾಮಗಳು ಈಗ ಸ್ಪಷ್ಟವಾಗುತ್ತಲಿವೆ.

ಕತೆ ಹೇಳುವಿಕೆಯು ಊಹಿಸುವ ಸಾಮರ್ಥ್ಯವನ್ನು ಕಲಿಸುತ್ತದೆ. ಮಕ್ಕಳು ತಾವು ಇಷ್ಟಪಡುವ ಕತೆಗಳನ್ನು ಮತ್ತೆ ಮತ್ತೆ ಕೇಳಬಯಸುತ್ತಾರೆ. ಕತೆಯು ಪೂರ್ಣವಾಗಿ ಮನದಟ್ಟಾಗುವಾಗ, ಮಕ್ಕಳು ತಮ್ಮಲ್ಲಿ ಬೆಳೆಯುತ್ತಿರುವ ಸಾಮರ್ಥ್ಯವನ್ನು ಪರೀಕ್ಷಿಸಲು ಇಂತಹ ಕತೆಗಳ ಪರಿಚಯವು ಸಹಾಯ ಮಾಡುತ್ತದೆ. ಅವರಿಗೆ ಗೊತ್ತಾಗದೇನೆ ಈ ಅರಿವು ಅವರಲ್ಲಿ ಮೂಡುವದು ಸಹಜ. ಎರಡನೇ ಅಥವಾ ಮೂರನೇ ಸಲ ಕತೆಯನ್ನು ಕೇಳಿದಾಗ ಅದರಲ್ಲಿ ಮುಂದೇ ಏನಾಗುತ್ತದೆ ಎಂಬುದನ್ನು ಅವರು ಸರಿಯಾಗಿ ಊಹಿಸಬಹುದೆಂದು ಮಕ್ಕಳು ಸಂತೋಷಪಡುತ್ತಾರೆ. ಭವಿಷ್ಯವನ್ನು ಸರಿಯಾಗಿ ಕಂಡುಹಿಡಿದ ಸಂತೋಷವು ಅನುಭವಿ ಕೇಳುಗರು ಕತೆಯನ್ನು ಕೇಳುವುದರಿಂದ ಪಡೆಯುವ ಪ್ರತಿಫಲವಾಗಿದೆ. ಇದು ಕೇವಲ ಸಂತೋಷವಲ್ಲ; ಇದು ಮಗುವಿಗೆ ಭವಿಷ್ಯ ಹೇಳುವ ಸಾಮರ್ಥ್ಯದಲ್ಲಿಯ ಆತ್ಮವಿಶ್ವಾಸ. ಈ ನಂಬಿಕೆಯು ಎಲ್ಲ ರೀತಿಯ ಬೆಳವಣಿಗೆಯಲ್ಲಿ - ವಿಶೇಷವಾಗಿ ಓದುವ ಸಾಮರ್ಥ್ಯದ ಬೆಳವಣಿಗೆಯಲ್ಲಿ - ಆಳವಾದ ಪಾತ್ರವನ್ನು ವಹಿಸುತ್ತದೆ. ಶಾಲೆಯ ಮೊದಲ ಎರಡು ತರಗತಿಗಳಲ್ಲಿ ಈ ಸಾಮರ್ಥ್ಯವು ದೊಡ್ಡ ಸವಾಲಾಗಿ ನಿಂತಿರುತ್ತದೆ. ನಾನು ಬರೆದ The Child's Language and the Teacher ಪುಸ್ತಕದಲ್ಲಿ ಸಾಕ್ಷರತೆಯು ಬೆಳವಣಿಗೆಯಲ್ಲಿ ಊಹಿಸುವ ಸಾಮರ್ಥ್ಯ ಮತ್ತು ಕಲಿಯುವ ಸಾಮರ್ಥ್ಯದ ಕೊಡುಗೆಯನ್ನು ನಾನು ವಿವರವಾಗಿ ಚರ್ಚಿಸಿದ್ದೇನೆ.

ಊಹಿಸುವ ಈ ಸಾಮರ್ಥ್ಯವು ಗಣಿತ ಮತ್ತು ವಿಜ್ಞಾನದಂತಹ ಗಹನ ವಿಷಯಗಳ ಅಧ್ಯಯನಕ್ಕೆ ಪ್ರಮುಖ ಕೊಡುಗೆಯಾಗಬಹುದು. ಸಮಸ್ಯೆಗಳಿಗೆ ಉತ್ತರ ಕಂಡುಹಿಡಿಯಲು ನಿಯಮಗಳ ಬಳಕೆ ಗಣಿತಶಾಸ್ತ್ರದಂತಹ ಅಧ್ಯಯನಗಳಲ್ಲಿ ಸೈದ್ಧಾಂತಿಕ ಮಹತ್ವ ಪಡೆದಿದೆ. ಕತೆಗಳಲ್ಲಿಯೂ ಕೂಡ ನಿಯಮಗಳಿವೆ. ಕತೆ ಮತ್ತು ಸಿದ್ಧಾಂತಗಳ ನಡುವಿರುವ ವ್ಯತ್ಯಾಸವೆಂದರೆ ಕತೆಯಲ್ಲಿಯ ನಿಯಮಗಳು ರೂಪಕಗಳ ರೂಪದಲ್ಲಿವೆ. ಉದಾಹರಣೆಗೆ, ಅನೇಕ ಕತೆಗಳು ಚಿಕ್ಕ ಪ್ರಾಣಿಗಳು ದೊಡ್ಡ ಗಾತ್ರದ ಪ್ರಾಣಿಗಳನ್ನು ಮೋಸಗೊಳಿಸಿ ವಿಜಯ ಪಡೆಯುವ ನಿಯಮವನ್ನು ಅನುಸರಿಸುತ್ತವೆ. ಮೊಲ ಮತ್ತು ಸಿಂಹದ ಕತೆಯಲ್ಲಿ ಇದೇ ನಡೆಯುತ್ತದೆ. ಮಕ್ಕಳು

ಕತೆಗಳನ್ನು ಆಲಿಸುತ್ತಿರುವಾಗ, ಅದರಲ್ಲಿ ಅಡಗಿದ ನಿಯಮಗಳನ್ನು ಹಿಡಿದಿಟ್ಟುಕೊಳ್ಳುತ್ತಾರೆ ಮತ್ತು ಈ ಹಿಡಿತವು ಅವರ ಊಹಿಸುವ ಸಾಮರ್ಥ್ಯವನ್ನು ಸುಧಾರಿಸುತ್ತದೆ.

ಕತೆಗಳು ಪ್ರಪಂಚದ ಬಗ್ಗೆ ಇರುವ ನಮ್ಮ ಅನುಭವಗಳನ್ನು ವಿಸ್ತರಿಸುತ್ತವೆ: ನಾನೀಗ ನಮ್ಮ ತಲೆಯಲ್ಲಿ ಇಲ್ಲವೆ ಮನಸ್ಸಿನಲ್ಲಿ ಅಡಗಿದ ಪ್ರಪಂಚದ ಬಗ್ಗೆ ಮಾತನಾಡುತ್ತಿದ್ದೇನೆ. ಕತೆಗಳು ಅದನ್ನು ವಿಸ್ತರಿಸುತ್ತವೆ. ಅವುಗಳ ಮೂಲಕ ನಾವು ನಮ್ಮ ಜೀವನದಲ್ಲಿ ಎಂದಿಗೂ ಭೇಟಿಯಾಗದ ಜನರು ಮತ್ತು ಸನ್ನಿವೇಶಗಳನ್ನು ತಿಳಿದುಕೊಳ್ಳುತ್ತೇವೆ.

ಅಂತಹ ಜನರನ್ನು ಅಥವಾ ಸನ್ನಿವೇಶಗಳನ್ನು ತಿಳಿದುಕೊಳ್ಳುವುದರಿಂದ ಏನು ಪ್ರಯೋಜನ? ಎಂದು ಪ್ರಶ್ನಿಸಬಹುದು. ನಿಜವಾಗಿ ನೋಡಿದರೆ ಇವು ಜೀವನದ ಭಾಗವಾಗಿವೆ. ನಾವು ಅವುಗಳನ್ನು ಪ್ರತ್ಯಕ್ಷವಾಗಿ ತಿಳಿದಿಲ್ಲದಿದ್ದರೂ ಅವು ನಮ್ಮ ಮನಸ್ಸನ್ನು ಆಳುತ್ತಲೇ ಇರುತ್ತವೆ. ಬಾಲ್ಯದಲ್ಲಿ ಇದು ವಿಶೇಷವಾಗಿ ಕಂಡು ಬರುತ್ತದೆ. ಸಾಮಾನ್ಯವಾಗಿ ಇವೆಲ್ಲವುಗಳು ನಮ್ಮ ಇಡೀ ಜೀವಿತಾವಧಿಯಲ್ಲಿ ಇರುತ್ತವೆ.

ಉದಾಹರಣೆಗೆ, ಚಿಕ್ಕ ಮಕ್ಕಳು ಅವರ ಸುತ್ತಲೂ ಯಾವುದೇ ಕೆಟ್ಟ ವ್ಯಕ್ತಿ ಇಲ್ಲದಿದ್ದಾಗಲೂ ಕೆಟ್ಟ ಜನರ ಬಗ್ಗೆ ತಲೆ ಕೆಡಿಸಿಕೊಳ್ಳುತ್ತಾರೆ. ಅಂತೆಯೇ, ಅವರು ತುಂಬಾ ಸ್ಮಾರ್ಟ್, ಚೆಲುವ ಅಥವಾ ಒಳ್ಳೆಯ ವ್ಯಕ್ತಿಯನ್ನು ಭೇಟಿಯಾಗುವ ಸಂಧಿಯ ಬಗ್ಗೆ ಉತ್ಸಾಹಿತರಾಗಿರುತ್ತಾರೆ. ಆದರ್ಶ ರೂಪದ ಕಲ್ಪನೆ ಮತ್ತು ಭೀಕರ ವಿಪತ್ತಿನ ಭಯ ಇವೆರಡೂ ಮಕ್ಕಳ ಮನಸ್ಸಿನಲ್ಲಿ ಮನೆ ಮಾಡಿಕೊಂಡಂತೆ ಇರುತ್ತವೆ. ಸಾಂಪ್ರದಾಯಿಕ ಕತೆಗಳು ಈ ಮನಸ್ಥಿತಿಯನ್ನು ವ್ಯಕ್ತಪಡಿಸುತ್ತಿರುವದರಿಂದ ಅವು ಮಕ್ಕಳನ್ನು ಸುಲಭವಾಗಿ ಆಕರ್ಷಿಸುತ್ತವೆ. ಕತೆಗಳನ್ನು ಕೇಳುವ ಮೂಲಕ, ಇನ್ನೂ ಅಕ್ಷರದ ಪರಿಚಯವಿರದ ಚಿಕ್ಕ ಮಗು ಕೂಡ ತನ್ನ ನೈಜ ಪ್ರಪಂಚಕ್ಕಿಂತ ದೊಡ್ಡದಾದ ಪ್ರಪಂಚದ ಕಲ್ಪನೆಯ ರೂಪವನ್ನು ಅನುಭವಿಸುತ್ತದೆ.

ಇನ್ನೊಂದು ಮಾತೆಂದರೆ ಕತೆಗಳಿಂದ ಸಿಗುವ ಅನುಭವ ಸಿಕ್ಕಾಪಟ್ಟೆ ರೀತಿಯಲ್ಲಿ ದೊರೆಯುವಂತಹದಲ್ಲ. ಇದಕ್ಕೆ ತದ್ವಿರುದ್ಧವಾಗಿ, ಈ ಅನುಭವವು ನಮ್ಮ ಅಸ್ತವ್ಯಸ್ತವಾಗಿರುವ ಜಗತ್ತನ್ನು ಕ್ರಮಬದ್ಧವಾಗಿಡಲು ಅಥವಾ ನೇಯ್ದ ವಸ್ತ್ರದಂತೆ ರಚಿಸಲು ಪ್ರಯತ್ನಿಸುತ್ತದೆ. ಸಾಮಾನ್ಯ ಅರ್ಥದಲ್ಲಿ ಅದು ಕಣ್ಣಿಗೆ ಕಾಣದಿದ್ದರೂ ಆಳವಾದ ಅರ್ಥದಲ್ಲಿ ಇದು 'ನೈತಿಕ' ರಚನೆಯೇ ಆಗಿರುತ್ತದೆ. ಕತೆಗಳಲ್ಲಿ ಕೆಲ ಸಲ ತಪ್ಪು ಮಾರ್ಗವನ್ನು ಅನುಸರಿಸಿ ದುರ್ಬಲರು ಗೆಲ್ಲುತ್ತಾರೆ. ಹಸಿದ ಸಿಂಹಕ್ಕೆ ಮೊಲವು ಸುಳ್ಳು ಹೇಳಿ ತನ್ನ ಜೀವ ಉಳಿಸಿಕೊಂಡದ್ದು ಇದರ ಉದಾಹರಣೆ ಆಗಬಹುದು.

**ಕತೆಗಳನ್ನು ಕೇಳುವುದು ಮತ್ತು ಓದುವುದು**

ಕತೆಗಳ ಹೇಳಿಕೆಯು ಮಕ್ಕಳ ಭಾಷೆಯ ಬಗ್ಗೆ ಇರುವ ತಿಳಿವಳಿಕೆಯನ್ನು ವಿಕಸಿತ ಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಶಬ್ದಗಳು ಪ್ರತಿಯೊಬ್ಬರ ಸ್ವಂತ ಆಸ್ತಿ ಇದ್ದಂತೆ. ವೈಯಕ್ತಿಕ ಮಟ್ಟದಲ್ಲಿ ಪ್ರಪಂಚದಲ್ಲಿ ಕಂಡು ಬಂದ ವಿವಿಧ ವಸ್ತುಗಳಿಗೆ ಬೇರೆ ಬೇರೆ ಹೆಸರುಗಳನ್ನು ನೀಡುವ ಸಾಮರ್ಥ್ಯ ಶಬ್ದಗಳು ಕೊಡುತ್ತವೆ. ಆದರೆ ಅದೇ ವೇಳೆಗೆ ಶಬ್ದಗಳು ಸಮಾಜದ ಆಸ್ತಿಯಾಗಿದ್ದು ನಮ್ಮ ಅನುಭವಗಳನ್ನು ಉಳಿದವರ ಜೊತೆ ಹಂಚಿಕೊಳ್ಳಲು ಆಸ್ಪದ ಕೊಡುತ್ತವೆ. ಶಬ್ದಗಳ ಈ ದ್ವಿಲಕ್ಷಣವು ಅವುಗಳನ್ನು ಅರ್ಥಯುತಪಡಿಸುತ್ತದೆ. ಉದಾಹರಣೆಗೆ, ಮಕ್ಕಳು ತಾವು ಅನುಭವಿಸಿದ 'ಹಸಿವಿ'ನ ಅನುಭವದ ಮೇಲಿಂದ ಸಿಂಹದ ಹಸಿವಿನ ಅನುಭವವನ್ನು ಸಹಜವಾಗಿ ತಿಳಿದುಕೊಳ್ಳುವರು. ಹೆಚ್ಚೆಚ್ಚು ಕತೆಗಳನ್ನು ಕೇಳುತ್ತ ಹೋದಂತೆ ಅವರ ಶಬ್ದಸಂಗ್ರಹವು ಹೆಚ್ಚುತ್ತ ಹೋಗುತ್ತದೆ. ಅಲ್ಲದೆ ಉಳಿದವರ ಅನುಭವಗಳನ್ನು ಹಂಚಿಕೊಳ್ಳುತ್ತ ಅವು ಅರ್ಥಪೂರ್ಣವಾಗುವ ಹಾಗೆ ತಿಳಿದುಕೊಳ್ಳಲು ಅವರನ್ನು ಅಣಿಮಾಡುತ್ತವೆ.

ವಾಸ್ತವವಾಗಿ, ಕತೆಯ ಸಂದರ್ಭದಲ್ಲಿ ಹೇಳಿದ ಮೇಲಿನ ಎಲ್ಲ ನಾಲ್ಕು ವಿಷಯಗಳು ಓದುವಿಕೆಗೂ ಅನ್ವಯಿಸುತ್ತವೆ. ಓದುವ ಸಾಮರ್ಥ್ಯವು ಮಕ್ಕಳಿಗೆ ಭಾಷೆಯ ನಿಯಮ ಮತ್ತು ರಚನೆಗಳ ಪರಿಚಯ ಮಾಡಿ ಕೊಡುತ್ತದೆ.. ಚೆನ್ನಾಗಿ ಓದುವ ಸಾಮರ್ಥ್ಯವು ಬುದ್ಧಿವಂತ ಊಹೆಗಳನ್ನು ಮಾಡುವ ಅಭ್ಯಾಸವನ್ನು ಅವಲಂಬಿಸಿರುತ್ತದೆ. ಭಾಷೆಯ ನಿಯಮಗಳನ್ನು ಸರಿಯಾಗಿ ತಿಳಿದು ಕೊಂಡರೆ, ಮುಂಬರುವ ವಾಕ್ಯದಲ್ಲಿ

ಅಥವಾ ಹೇಳಿಕೆಯಲ್ಲಿ ಮುಂದೆ ಏನಾಗಲಿದೆ ಎಂಬುದನ್ನು ಮಕ್ಕಳು ಸರಿಯಾಗಿ ಊಹಿಸಬಹುದು. ಈ ದೃಷ್ಟಿಕೋನದಿಂದ ಕತೆ ಹೇಳುವುದು ಮಕ್ಕಳನ್ನು ಸುಶಿಕ್ಷಿತರಾಗಲು ಉಪಯುಕ್ತವಾಗಿದೆ.

**ಕತೆಗಳನ್ನು ಹೇಳುವ ಕೌಶಲ್ಯ**

ಕತೆ ಹೇಳುವ ಕುಶಲತೆಯಲ್ಲಿ ಪಾರಂಗತರಾಗ ಬಯಸುವವರು ನೆನಪಿನ ಶಕ್ತಿಯನ್ನು ಗಂಭೀರವಾಗಿ ತೆಗೆದುಕೊಳ್ಳಬೇಕು. ಕತೆ ಹೇಳುವವನು ಕತೆಯನ್ನು ಸರಿಯಾಗಿ ನೆನಪಿಟ್ಟುಕೊಳ್ಳದಿದ್ದಲ್ಲಿ ಉತ್ತಮ ಕತೆಯನ್ನು ಕೂಡ ಹಾಳುಮಾಡಬಹುದು. ಕಂಠಪಾಠವು ಆತ್ಮವಿಶ್ವಾಸವನ್ನು ಹೆಚ್ಚಿಸುತ್ತದೆ ಮತ್ತು ಕತೆಗಾರನಿಗೆ ನಿರಾಳವಾಗುವಂತೆ ಮಾಡುತ್ತದೆ. ಶಾಂತ ಚಿತ್ತದಿಂದ ಹೇಳುವ ಕತೆಗಾರನು ಕತೆ ಕೇಳುವವರೊಂದಿಗೆ ತೀರ ಹತ್ತಿರದ ಸಂಬಂಧವನ್ನು ನಿರ್ಮಿಸಬಹುದು. ಎರಡನೆಯದಾಗಿ, ಕತೆಯನ್ನು ಚೆನ್ನಾಗಿ ನೆನಪಿಟ್ಟವನು ಕೇಳುವವರ ಮನಸ್ಸನ್ನು ಒಂದು ಬ್ಲೂಪ್ರಿಂಟದಂತೆ ಉಪಯೋಗಿಸಬಹುದು.

ನಿಮ್ಮ ಅನುಕೂಲದಂತೆ ಇಲ್ಲವೆ ಕೇಳುಗರ ಮನಸ್ಥಿತಿಗೆ ಅನುಗುಣವಾಗಿ ಈ ನಕ್ಷೆಯನ್ನು ತುಂಬಬಹುದು. ಹೀಗೆ ನಕ್ಷೆಯನ್ನು ತುಂಬುವಾಗ ಕತೆಯನ್ನು ಸ್ವಲ್ಪದರಲ್ಲಿ ಹೇಳಬೇಕೋ ಇಲ್ಲವೆ ವಿಸ್ತಾರದಲ್ಲಿ ಹೇಳಬೇಕೋ ಎಂಬುದರ ನಿರ್ಣಯ ಬಹು ಮುಖ್ಯವಾದದ್ದು. ಒಂದು ದಿನ ನೀವು ಕತೆ ಹೇಳುವಾಗ ಮೊದಲಿನ ಕೆಲ ಹಂತಗಳನ್ನು ವಜಾಮಾಡಿ ಮೊಲವು ತ್ವರಿತವಾಗಿ ಸಿಂಹದ ಗವಿಯ ಬಾಗಿಲಲ್ಲಿ ಬಂದಿತು ಎಂದು ಹೇಳಬಹುದು. ಕೆಲವು ದಿನ ನೀವು ಕತೆಯ ಮೊದಲ ಭಾಗವನ್ನು ವಿಸ್ತರಿಸಿ ಹೇಳಲು ಬಯಸಬಹುದು, ಮತ್ತೊಂದು ದಿನ ಆಹಾರಕ್ಕಾಗಿ ಕಾಯುತ್ತಿರುವಾಗ ಸಿಂಹದ ಮನಸ್ಸಿನಲ್ಲಿ ಹಾದು ಹೋಗುವ ಆಲೋಚನೆಗಳನ್ನು ವಿವರವಾಗಿ ಚರ್ಚಿಸಬಹುದು. ಇಲ್ಲವೆ ಸಿಂಹದ ಗುಹೆಗೆ ಹೋಗುವ ದಾರಿಯಲ್ಲಿ ಮೊಲದ ಮನಸ್ಸಿನಲ್ಲಿ ಮೂಡಿದ ಕಲ್ಪನೆಗಳನ್ನು ಹೊರಹೊಮ್ಮಿಸಬಹುದು.

ಮಕ್ಕಳೊಂದಿಗೆ ಕತೆಯನ್ನು ಹೇಳುವದರಲ್ಲಿ ವಿವಿಧ ಆಯ್ಕೆಗಳನ್ನು ಅವಲಂಬಿಸಬಹುದು. ಬೇಕಿದ್ದರೆ ನಾಟ್ಯಮಯ ರೀತಿಯಲ್ಲಿ ಎರಡೆರಡು ಧ್ವನಿ, ಸನ್ನೆ ಇಲ್ಲವೆ ಭಂಗಿಗಳನ್ನು ಉಪಯೋಗಿಸಬಹುದು. ಕೈ ಗೊಂಬೆಗಳ ಮುಖಾಂತರ ಸಂಭಾಷಣೆ ಸಾಧಿಸಬಹುದು. ಒಂದು ಮೂಲೆಯಿಂದ ಮತ್ತೊಂದು ಮೂಲೆಯವರೆಗೆ ಅಡ್ಡಾಡುತ್ತ ಎರಡೂ ಪಾತ್ರಗಳ ಸಂಭಾಷಣೆ ಮಾಡಬಹುದು. ಈ ಎಲ್ಲ ಸಾಧ್ಯತೆಗಳು ಮಕ್ಕಳ ಮನವನ್ನು ಸೆಳೆಯಲು ಉಪಯುಕ್ತವಾಗುತ್ತವೆ. ಇವೆಲ್ಲವು ಕತೆ ಹೇಳುವವರಿಗೆ ಸವಾಲನ್ನೊಡ್ಡುತ್ತವೆ. ವರ್ಷಾನುಗಟ್ಟಲೆ ಇಲ್ಲವೆ ವರ್ಷದಲ್ಲಿಯ ಹಲವಾರು ಸಲ ಮಕ್ಕಳ ಉತ್ಸುಕತೆಯನ್ನು ಎಳ್ಳಷ್ಟು ಕಡಿಮೆ ಮಾಡದೆ ಕತೆ ಹೇಳುತ್ತ ಹೋಗುವದು ಅಷ್ಟು ಸುಲಭವಾಗಲಿಕ್ಕಿಲ್ಲ.

ಶಿಕ್ಷಕರ ದೈನಂದಿನದ ಚಟುವಟಿಕೆಗಳಲ್ಲಿ ಕತೆ ಹೇಳಿಕೆಯನ್ನು ಸೇರಿಸಿದರೆ ಅವರ ಜೀವನ ಕೂಡ ನೀರಸವೆನ್ನಿಸಲಿಕ್ಕಿಲ್ಲ. ಮಾತ್ರ ಪ್ರಾಥಮಿಕ ಶಾಲೆಯ ಪಠ್ಯಕ್ರಮದಲ್ಲಿ ಕತೆ ಹೇಳಿಕೆಯಬಗ್ಗೆ ಇರುವ ಪೂರ್ವದೂಷಿತದೃಷ್ಟಿಯನ್ನು ಪೂರ್ಣವಾಗಿ ಬದಲಿಸಬೇಕಾಗುವದು.

## ಬುದ್ಧಿವಂತ ಮೊಲ ಮತ್ತು ಕಾಡಿನರಸ ಸಿಂಹದ ಕತೆ

ಬಹಳ ಕಾಲದ ಹಿಂದೆ, ಒಂದು ದಿನ ಕಾಡಿನ ಅರಸನಾದ ಸಿಂಹವು ತನ್ನ ಆಹಾರಕ್ಕಾಗಿ ಬೇಟೆ ಆಡುವದಕ್ಕೆ ಬೇಸರಗೊಂಡಿತು. 'ಕಾಡಿನಲ್ಲಿಯ ಪ್ರಾಣಿಗಳು ನನ್ನ ಮಾತನ್ನು .ಕೇಳುತ್ತವೆ, ನನ್ನನ್ನು ಅರಸನೆಂದು ಕರೆಯುತ್ತವೆ, ಅಲ್ಲದೆ ಬೇಟೆಗಾಗಿ ಅಲೆಯದೆ ನಾನು ಅವುಗಳನ್ನು ಕರೆದು ದಿನಾಲು ಒಂದೊಂದು ಪ್ರಾಣಿ ಬಂದು ನನ್ನ ಹಸಿದ ಹೊಟ್ಟೆಯನ್ನು ತುಂಬಿದರೆ ನಾನು ಬೇಟೆಗಾಗಿ ಒದ್ದಾಡುವದು ತಪ್ಪುತ್ತದೆ' ಎಂದು ಮನದಲ್ಲಿ ಯೋಚಿಸಿ ಸಿಂಹವು ಅಡವಿಯಲ್ಲಿಯ ಎಲ್ಲ ಪ್ರಾಣಿಗಳ ಸಭೆ ಕರೆಯಿತು. ಸಭೆಯಲ್ಲಿ "ನೀವೆಲ್ಲ ನನ್ನ ಪ್ರಜೆಗಳು. ನನ್ನ ಆಹಾರಕ್ಕಾಗಿ ದಿನಾಲು ನಾನು ಬೇಟೆಗ ಹೋಗಬೇಕಾಗುತ್ತದೆ. ಇದರಿಂದಾಗಿ ಇಡೀ ಅಡವಿಯೇ ತತ್ತರಿಸಿ ಅಂಜುತ್ತದೆ. ನಾನು ದಿನಾಲು ಒಂದೇ ಪ್ರಾಣಿಯನ್ನು ಕೊಂದು ತಿನ್ನುತ್ತೇನೆ..ಆದರೆ ನೀವೆಲ್ಲರು ಅಂಜಿ ನಡುಗುತ್ತಿರಿ. ಆದ್ದರಿಂದ ನಾವು ಒಂದು ಒಪ್ಪಂದಕ್ಕೆ ಬರುವ. ಪ್ರತಿ ಮುಂಜಾನೆ ನನಗೆ ಒಂದು ಪ್ರಾಣಿಯನ್ನು ತಿನ್ನಲು ಕೊಟ್ಟರೆ ನೀವೆಲ್ಲ ಹಾಯಾಗಿ ನನಗೆ ಅಂಜದೆ ಅಡವಿ ತುಂಬ ಚಲಿಸಬಹುದು. ನಿಮ್ಮೊಳಗೆನೇ ಯಾರನ್ನು

ಕಳಿಸಬೇಕು ಎಂಬುದನ್ನು ನಿರ್ಧರಿಸಿರಿ. ಇದು ನಮ್ಮಿಬ್ಬರಿಗೂ ಅನುಕೂಲವಾದ ಒಪ್ಪಂದ. ನನಗೂ ಸಿಕ್ಕಾಪಟ್ಟೆ ಬೇಟೆಯಾಡುವ ತೊಂದರೆ ಇಲ್ಲ. " ಎಂದು ಹೇಳಿತು.

ಎಲ್ಲ ಪ್ರಾಣಿಗಳು ತಮ್ಮತಮ್ಮೊಳಗೆ ಚರ್ಚೆ ಮಾಡಿದವು. ಈ ವ್ಯವಸ್ಥೆ ಎಲ್ಲರಿಗೂ ಸರಿಹೋಗುವ ವ್ಯವಸ್ಥೆ ಎಂದು ಅವರೆಲ್ಲ ಒಪ್ಪಿದರು. ಚೀಟಿಗಳ ಮೇಲೆ ಪ್ರಾಣಿಗಳ ಹೆಸರು ಬರೆದು ಅದರಲ್ಲಿಯ ಒಂದು ಚೀಟಿಯನ್ನು ಎತ್ತಿ ಅದರ ಮೇಲೆ ಹೆಸರಿರುವ ಪ್ರಾಣಿ ಮರು ದಿನ ತಪ್ಪದೇ ವೇಳೆಗೆ ಸರಿಯಾಗಿ ಹೋಗುವದೆಂದು ತೀರ್ಮಾನವಾಯಿತು. ಈ ಹೊಸ ಯೋಜನೆಯನ್ನು ಕೂಡಲೆ ಜಾರಿಗೆ ತರುವ ನಿರ್ಣಯವಾಯಿತು. ಮೊಲದ ಹೆಸರಿನ ಚೀಟಿ ಬರುವವರೆಗೆ ವ್ಯವಸ್ಥೆ ಸರಿಯಾಗಿ ನಡೆಯತೊಡಗಿತು. ಆದರೆ ಮೊಲವು "ನಾನು ಸಿಂಹದ ಆಹಾರದ ತುತ್ತಾಗಲಾರೆ" ಎಂದು ಜಾಹೀರ ಪಡಿಸಿತು.

"ಸಿಂಹವು ಮಾತು ಕೊಟ್ಟಂತೆ ನಡೆಯುತ್ತದೆ. ಅದರಂದಲೇ ನಾವೆಲ್ಲ ಕಾಡಿನಲ್ಲಿ ಯಾವದೇ ಅಳುಕವಿಲ್ಲದೆ ಹಾಯಾಗಿ ತಿರುಗುತ್ತಿದ್ದೇವೆ." ನರಿ ಹೇಳಿತು.

"ನೀನು ಹೋಗದಿದ್ದರೆ ನೀನು ನಮ್ಮನ್ನೆಲ್ಲ ಇಕ್ಕಟ್ಟಿನಲ್ಲಿ ಸಿಗಿಸಿ ಬಿಡುವೆ." ಮಂಗ ಹೇಳಿತು.

"ನಾನು ಈ ಕ್ರೌರ್ಯವನ್ನು ಮುಗಿಸಿಬಿಡುವೆ." ಮೊಲ ವಿಶ್ವಾಸದಿಂದ ಹೇಳಿತು. ಆದರೆ ಅದಕ್ಕೇನೇ ತನ್ನ ನುಡಿಯಲ್ಲಿ ನಂಬಿಕೆ ಇರಲಿಲ್ಲ. "ನೋಡಿ, ಒಂದು ದಿನ ನೀವು ನನಗೆ ಧನ್ಯವಾದ ಕೊಡುವಿರಿ." ಮೊಲ ಮುಂದುವರಿಸಿತು.

"ಮತ್ತೊಮ್ಮೆ ಸಿಂಹ ಬೇಟೆಯಾಡಲು ಹೊರಬಿದ್ದರೆ ನಾವು ನಿನಗೆ ಧನ್ಯವಾದ ಕೊಡಲಾರೆವು." ಇನ್ನೊಂದು ನವಿಲು ಎಚ್ಚರಿಸಿತು.

"ಇದನ್ನೆಲ್ಲ ನನಗೆ ಬಿಟ್ಟುಬಿಡಿ." ಮೊಲ ಉತ್ತರ ಕೊಟ್ಟಿತು. ಇಷ್ಟು ಹೇಳಿ ಮೊಲ ತನ್ನ ವಾಸಸ್ಥಾನಕ್ಕೆ ತಿರುಗಿ ಹೋಯಿತು. ಇಡೀ ರಾತ್ರಿ ಅದಕ್ಕೆ ನಿದ್ದೆ ಬರಲಿಲ್ಲ. ಈ ದುಷ್ಟ ಸಿಂಹದಿಂದ ತನ್ನ ಉಳಿದ ಗೆಳೆಯರನ್ನು ಹೇಗೆ ಪಾರು ಮಾಡಬೇಕು ಎಂಬ ವಿಚಾರ ಅದನ್ನು ಪೀಡಿಸುತ್ತಿತ್ತು.

ಮುಂಜಾವಿನಲ್ಲಿ ಅದಕ್ಕೆ ಒಂದು ಉಪಾಯ ಹೊಳೆಯಿತು. ಕೂಲಂಕುಶವಾಗಿ ವಿಚಾರ ಮಾಡಿ ಈ ಉಪಾಯವನ್ನು ಜಾರಿಗೆ ತರುವ ರೀತಿಯನ್ನು ಮೊಲವು ಯೋಚಿಸಿತು. ಸಿಂಹದ ಗವಿಗೆ ಹೋಗುವ ಮೊದಲು ಕೆಲ ಹೊತ್ತು ಅದು ನಿದ್ದೆ ಮಾಡಿತು. ಸಾಕಷ್ಟು ವೇಳೆಯ ನಂತರ ಅದು ಸಿಂಹದ ಗವಿಯ ಬಾಗಿಲಲ್ಲಿ ಬಂದು ನಿಂತಿತು. ಸಿಂಹ ಹಸಿದು ಕಸಿವಿಸಿ ಪಡೆಯುತ್ತಿತ್ತು. ತಡ ಮಾಡಿ ಬಂದ ಮೊಲವನ್ನು ಕಂಡು ಸಿಟ್ಟಿನಲ್ಲಿ ದೊಡ್ಡದಾಗಿ ಗರ್ಜಿಸಿ "ಏ ಮೂರ್ಖ ಮೊಲವೇ,, ಮೊದಲೇ ನೀನು ಅಲ್ಪಶರೀರಿ. ಮತ್ತೆ ತಡವಾಗಿ ಬಂದಿರುವೆ. ಈ ಅಪರಾಧಕ್ಕಾಗಿ ನಿನ್ನನ್ನು ಕೊಂದು ಸಕಲಪ್ರಾಣಿಕುಲವನ್ನೇ ನಾಶಮಾಡಿಬಿಡುವೆನು."

ಮೊಲವು ವಿನಯಪೂರ್ವಕವಾಗಿ – "ಸ್ವಾಮೀ, ಇದು ನನ್ನ ಅಪರಾಧವಲ್ಲ ಹಾಗೂ ಇತರ ಪ್ರಾಣಿಗಳ ತಪ್ಪೂ ಅಲ್ಲ. ನಾನು ತಡವಾಗಿ ಬಂದ ಕಾರಣವನ್ನು ಕೇಳಿ"

ಸಿಂಹ – "ನಾನು ನಿನ್ನನ್ನು ತಿಂದುಬಿಡುವುದರೊಳಗೆ ಬೇಗನೆ ಹೇಳಿ ಮುಗಿಸು."

ಮೊಲ – "ಸ್ವಾಮೀ, ಸರದಿಯಂತೆ ಚೀಟಿ ಎತ್ತಿದ ಮೇರೆಗೆ ಇಂದು ಆಹಾರವಾಗಿ ಬರಬೇಕಿದ್ದ ನನ್ನನ್ನು ಪ್ರಾಣಿಗಳು ಕಳಿಹಿಸಿದರು. ನಾನು ಬರುತ್ತಿದ್ದಾಗ ಗುಹೆಯಿಂದ ಹೊರಬಂದ ಬೇರೊಂದು ದೊಡ್ಡ ಸಿಂಹವು – 'ಎಲ್ಲಿಗೆ ಹೊರಟಿರುವಿರಿ, ನಿನ್ನ ಇಷ್ಟದೇವತೆಗಳನ್ನು ಸ್ಮರಿಸಿಕೊಳ್ಳು' ಎಂದಿತು. ಆಗ ನಾನು – 'ನಾವು ಒಪ್ಪಂದದ ರೀತ್ಯಾ ಪ್ರಭುವಿನ ಬಳಿಗೆ ಆಹಾರವಾಗಿ ಹೋಗುತ್ತಿದ್ದೇವೆ' ಎಂದಾಗ ಅದು – 'ಇದು ನನ್ನ ಕಾಡು, ಆದ್ದರಿಂದ ಎಲ್ಲಾ ಪ್ರಾಣಿಗಳು ನನ್ನೊಂದಿಗೆ ನಿಯಮದಂತೆ ನಡೆದುಕೊಳ್ಳಬೇಕು. ಆ ಸಿಂಹ ಮೈಗಳ್ಳ. ನೀನು ಹೋಗಿ ಅವನನ್ನು ಕರೆದುಕೊಂಡು ಬೇಗನೆ ಬಾ. ನಮ್ಮಿಬ್ಬರಲ್ಲಿ ಯಾರು ಪರಾಕ್ರಮಿಯೋ ಅವನು ರಾಜನಾಗಿ ಈ ಕಾಡನ್ನು ಆಳುವೆವು ಎಂದು ಹೇಳಿತು. ಅದರಂತೆ ನಾನು ಇಲ್ಲಿಗೆ ಬಂದಿರುವೆನು. ತಡವಾಗಿ ಬರಲು ಇದೇ

ಕಾರಣ. ಸ್ವಾಮಿಗಳೇ, ನಿಮ್ಮ ಜೀವವೇ ಈಗ ಸಂಕಟದಲ್ಲಿ ಸಿಕ್ಕಿದೆ. ಈಗ ಏನು ಮಾಡಬೇಕೆಂದು ನೀವೇ ನಿರ್ಧರಿಸಿ"

ಇದನ್ನು ಕೇಳಿದ ಸಿಂಹವು ರೊಚ್ಚಿಗೆದ್ದು ಸಿಟ್ಟಿನಲ್ಲಿಯೇ "ಆ ಸಿಂಹ ಎಲ್ಲಿದೆ ತೋರಿಸು." ಎಂದು ಗರ್ಜಿಸಿತು.

ಮೊಲವು ಮುಂದೆ ಮತ್ತು ಅದರ ಹಿಂದೆ ಸಿಂಹ ಹೀಗೆ ನಡೆಯತೊಡಗಿದವು. "ಸ್ವಾಮಿಗಳೇ, ಮೆಲ್ಲನೆ. ನಾವೀಗ ಆ ದುಷ್ಟ ಸಿಂಹದ ಗವಿಯ ಸಮೀಪ ಬಂದಿದ್ದೇವೆ." ಎಂದು ಮೊಲ ಪಿಸುದನಿಯಲ್ಲಿ ಹೇಳಿತು. ನಿಜವಾಗಿ ನೋಡಿದರೆ ಮೊಲವು ಸಿಂಹವನ್ನು ಆಳವಾದ ಬಾವಿಯ ಹತ್ತಿರ ಒಯ್ಯುತ್ತಿತ್ತು. "ಸ್ವಲ್ಪ ನಿಲ್ಲಿ." ಎಂದು ಮೊಲ ಹೇಳುತ್ತ ಬಾವಿಯಲ್ಲಿ ಇಣಿಕಿ ನೋಡಿತು. ಅದರ ಪ್ರತಿಬಿಂಬ ಅದಕ್ಕೆ ಕಂಡಿತು.

ಆ ಮೇಲೆ ಅದು ಸಿಂಹವನ್ನು ಕರೆದು ಕೆಳಗೆ ನೋಡಿ, "ಸ್ವಾಮಿ. ಆ ಸಿಂಹವೇ ನಿಮ್ಮ ರಾಜ್ಯವನ್ನು ಕಸಿದುಕೊಳ್ಳಲು ಹವಣಿಸುತ್ತದೆ." ಎಂದು ಮೊಲ ಹೇಳಿತು. ಸಿಂಹವು ಕೆಳಗೆ ನೋಡಿದಾಗ ರೊಚ್ಚಿಗೆದ್ದ ಮುಖದ ಸಿಂಹ ಕಂಡಿತು. ಸಿಂಹವು ಮೊಲದ ಮಾತನ್ನು ನಂಬಿ ಬಾವಿಯೊಳಗಿರುವ ಸಿಂಹವನ್ನು ಕೊಲ್ಲಲು ಬಾವಿಯೊಳಕ್ಕೆ ಹಾರಿ ತನ್ನ ಪ್ರಾಣವನ್ನು ಕಳೆದುಕೊಂಡಿತು.

ಮೊಲವು ಉಳಿದ ಪ್ರಾಣಿಗಳಿದ್ದಲ್ಲಿ ಬಂದು "ನಾನು ಸಿಂಹವನ್ನು ಕೊಂದು ಬಂದೆ. ಇನ್ನು ನಾವೆಲ್ಲ ಹಾಯಾಗಿ ಇರಬಹುದು." ಎಂದು ಹೇಳಿತು. ಆ ಮೇಲೆ ತಾನು ಸಿಂಹವನ್ನು ಕೊಲ್ಲುವದಕ್ಕಾಗಿ ಏನೇನು ಮಾಡಿದೆ ಎಂಬುದನ್ನು ಕತೆ ಮಾಡಿ ಬಣ್ಣಿಸಿ ಹೇಳಿತು. ಅಂದಿನಿಂದ ಎಲ್ಲ ಪ್ರಾಣಿಗಳು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಮೊಲದ ಸಹಾಯವನ್ನು ಕೇಳತೊಡಗಿದವು. ಅದಕ್ಕೆ 'ಬುದ್ಧಿವಂತ ಮೊಲ' ಎಂದು ಕರೆಯತೊಡಗಿದವು.

ಹೀಗೆ ಮೊಲವು ತನ್ನ ಬುದ್ಧಿವಂತಿಕೆಯಿಂದ ಬಹು ಬಲಶಾಲಿಯಾದ ಸಿಂಹವನ್ನು ಕೊಲ್ಲುವುದರ ಜೊತೆಗೆ ತನ್ನ ಮತ್ತು ಕಾಡಿನ ಎಲ್ಲಾ ಪ್ರಾಣಿಗಳ ಪ್ರಾಣವನ್ನು ರಕ್ಷಿಸಿತು.

*ಪ್ರೊ. ಕೃಷ್ಣ ಕುಮಾರ್ ಇವರು ಖ್ಯಾತ ಶಿಕ್ಷಣತಜ್ಞರು ಮತ್ತು ಶಿಕ್ಷಣ ವಿಷಯಗಳ ಬಗ್ಗೆ ಬರೆಯುವ ಲೇಖಕರು.*